ಬಿ. ಪಾಂಡುಕುಮಾರ್ *

# ಮಧುಗಿರಿ ಪಾಳೆಯಗಾರರ ಕೈಫಿಯತ್ತು - ಒಂದು ಚಾರಿತ್ರಿಕ ಪರಿಶೀಲನೆ

ಮಧುಗಿರಿ ಮಹಾನಾಡ ಪ್ರಭುಗಳಿಗೆ ಸಂಬಂಧಿಸಿದಂತೆ ಶಾಸನಾಧಾರಗಳು ಕಡಿಮೆಯಾದರೂ ನಾಲ್ಕಾರು ಕೈಫಿಯತ್ತುಗಳು ಲಭ್ಯವಿದ್ದು ಅವು ಐತಿಹಾಸಿಕ ಅಂಶಗಳಿಗಿಂತ ಐತಿಹ್ಯ ಅಂಶಗಳಿಂದ ಕೂಡಿವೆಯೆಂದರೆ ತಪ್ಪಾಗಲಾರದು. ಈ ಕೈಫಿಯತ್ತುಗಳಲ್ಲಿ ಕಂಡುಬರುವ ತೇದಿ ವಿವರಗಳು ಬಹಳಷ್ಟು ಕಡೆ ಚಾರಿತ್ರಿಕವಾಗಿ ತಾಳೆಯಾಗುವುದಿಲ್ಲ.

ಪ್ರಸ್ತುತ ಮಧುಗಿರಿ ತಾಲೂಕಿನ ಬೇಡತ್ತೂರು ಗ್ರಾಮದಲ್ಲಿ ವಾಸವಾಗಿರುವ ಡಾ|| ರಾಮಾಂಜನೇಯರವರ ಬಳಿಯಿರುವ ಕೈಫಿಯತ್ತು ಸುಮಾರು ಎಂಟು ಅಂಗುಲ ಅಗಲ ಹಾಗು ಸುಮಾರು ಆರು ಅಡಿ ಉದ್ದ; ಎರಡೂ ಕಡೆ ಒಂದು ರೀತಿಯ ಕಪ್ಪು ಮಸಿಯಿಂದ ಬರೆಯಲಾಗಿರುವ ಈ ಕೈಫಿಯತ್ತಿನಲ್ಲಿ ದಾಖಲಾಗಿರುವ ಹಲವು ವಿವರಗಳು ಅಷ್ಟಾಗಿ ಈವರೆಗೆ ಚಾರಿತ್ರಿಕ ಪರಿಶೀಲನೆಗೆ ಒಳಪಟ್ಟಿಲ್ಲದ ಕಾರಣ ಅವುಗಳನ್ನು ಪರಿಶೀಲಿಸುವುದು ಅಗತ್ಯವಾಗಿದೆ.

ಈ ಕೈಫಿಯತ್ತಿನಲ್ಲಿ ಟಿಪ್ಪು ಸುಲ್ತಾನನ ಆಳ್ವಿಕೆಯ ಆಚೀಚಿನ ಕಾಲಕ್ಕೆ ಸಂಬಂಧಿಸಿದಂತೆ ದಾಖಲಾಗಿರುವ ವಿವರಗಳು ಹೆಚ್ಚು ವಿಶ್ವಸನೀಯವಾಗಿದ್ದು ಅವುಗಳನ್ನು ಈ ರೀತಿ ಸಂಗ್ರಹಿಸಬಹುದು :

ವಿಜಯನಗರದಲ್ಲಿ ಶ್ರೀರಂಗರಾಯರು ಪಟ್ಟಕ್ಕೆ ಬಂದ ಮೇಲೆ ಮಧುಗಿರಿಯಲ್ಲಿ ಚಿಕ್ಕಗೌಡರು ಆಳುತ್ತಿದ್ದರು. ಇವರಿಗೆ ಮುಮ್ಮಡಿ ರಾಮಪ್ಪಗೌಡ ಹಾಗೂ ತಿಮ್ಮಪ್ಪಗೌಡ ಎಂಬ ಇಬ್ಬರು ಮಕ್ಕಳಿದ್ದರು. ಜೇಷ್ಠ ಪುತ್ರನಾದ ರಾಮಪ್ಪಗೌಡನಿಗೆ ಪಟ್ಟಾಭಿಷೇಕವಾಯಿತು. ಕಾಲಾನಂತರದಲ್ಲಿ ಇವರಲ್ಲಿ ಅನ್ಯೋನ್ಯತೆಯಿಲ್ಲದೆ ಕಿರಿಯವನಾದ ತಿಮ್ಮಪ್ಪಗೌಡ ಮೈಸೂರಿಗೆ ಹೋಗಿ ಅಲ್ಲಿನ ಅರಸರ ನೆರವನ್ನು ಪಡೆದು ಮಧುಗಿರಿ ಚನ್ನರಾಯದುರ್ಗಗಳ ಮೇಲೆ ಠಾಣೆ ಹಾಕಿಸಿದನು. ಅದೇ ಸಮಯಕ್ಕೆ ಶ್ರೀರಂಗರಾಯರು ಮೃತರಾದುದರಿಂದ ರಾಮಪ್ಪಗೌಡರಿಗೆ ಅವರಿಂದ ನೆರವು ದೊರೆಯದಂತಾಯಿತು. ಕಾಲಾನಂತರ ಶ್ರೀ ರಂಗಪಟ್ಟಣಕ್ಕೆ ತೆರಳಿದ ಸಹೋದರರು ಅಲ್ಲಿ ಕೆಲವು ಕಾಲವಿದ್ದು ಅಲ್ಲಿ ಮೃತ ರಾದರು. ಅನಂತರದಲ್ಲಿ ರಾಮಪ್ಪಗೌಡನ ಮಗನಾದ ಮುಮ್ಮಡಿ ಹಿರೇಗೌಡ ಸಾಹಸ ಧೈರ್ಯದಿಂದ ಕುಟುಂಬ ಸಮೇತರಾಗಿ ಶ್ರೀ ರಂಗಪಟ್ಟಣದಿಂದ ಬಂದು ಮಿಡಿಗೇಶಿಯಲ್ಲಿ ಠಾಣೆಹಾಕಿಕೊಂಡು ರಾಜ್ಯವಾಳುತ್ತಿದ್ದರು. ನಂತರ ಇವನ ಮಗನಾದ ಮುಮ್ಮಡಿ ತೋಂಟದ ರಾಯರು ಅಧಿಕಾರಕ್ಕೆ ಬಂದು, ಆತ ದೈವಾಧೀನರಾದ ಸಂದರ್ಭದಲ್ಲಿ ಮಧುಗಿರಿಯಲ್ಲಿದ್ದ ಮಲ್ಲರಾಜಯ್ಯನೆಂಬುವವನು ಮೈಸೂರು ಅರಸರ ಸಹಕಾರದಿಂದ ಮಿಡಿಗೇಶಿಗೆ ಠಾಣೆ ಹಾಕಿಕೊಂಡು ತೋಂಟದರಾಯ ಕುಟುಂಬದವರಿಗೆ ಜೀವನಾರ್ಥಕ್ಕಾಗಿ ಕೆರೆಯೂರು ಎಂಬ ಎರಡು ಸಾವಿರ ವರಹ ಆದಾಯ ವಿರುವ ಸೀಮೆಯನ್ನು ನೀಡಲಾಯಿತು. ಅದೇ ಸಮಯಕ್ಕೆ ಟಿಪ್ಪು ಸುಲ್ತಾನ, ಮೊಗಲ ಬಾದಷಹ[1] ಹಾಗೂ ಮರಾಠರಿಗೂ ದ್ವೇಷದ ಕಾರಣ ಚನ್ನಬಸಪ್ಪಗೌಡರು ಸಂಸ್ಥಾನವನ್ನು ಬಿಟ್ಟು ವೇಮಲಪಾಳ್ಯದಲ್ಲಿ ತಂಗಿದ್ದು ಕಡೆಗೆ ಕೃಷ್ಣಗಿರಿಗೆ ಹೋಗಿ ಕರ್ನಲ್ ರೀಟ್ಸ್ ಸಾಹೇಬರವರನ್ನು ಕಂಡು ನಡೆದ ಸಂಗತಿಯನ್ನು ತಿಳಿಸಿ ತಮಗೆ ಸಹಾಯ ಬೇಕೆಂದು ಯಾಚಿಸಲಾಗಿ, ಕರ್ನಲ್ ರೀಟ್ಸ್ ಸಾಹೇಬರು ತಮ್ಮ ಕಂಪನಿಯ ಫೌಜು ದಂಡು ಸಮೇತ ಬರುತ್ತಾಯಿದೆ, ಬಂದ ಕೂಡಲೆ

* ಇತಿಹಾಸ ಅಧ್ಯಾಪಕರು. ವಿವೇಕಾನಂದ ಪದವಿ ಕಾಲೇಜು, ಡಾ|| ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-೧೦

1 ಹೈದರಾಬಾದ್ ನಿಜಾಮ?

ಬೆಂಗಳೂರಿಗೆ ಬರುತ್ತೇವೆ. ಅಷ್ಟರಲ್ಲಿ ನಿಮ್ಮವರನ್ನು ಕಲೆಹಾಕಿ ನಮ್ಮ ಕಂಪನಿಯ ದಂಡಿಗೆ ಅನುಕೂಲ ಮಾಡಿಕೊಡಿ ಎಂದು ಅಪ್ಪಣೆ ಕೊಟ್ಟರು. ಅದರಂತೆ ವಾಪಸ್ಸು ಬರಲಾಗಿ ಜನರಲ್ ಹ್ಯಾರಿಸರ ದಂಡು ಟಿಪ್ಪುವನ್ನು ಪರಾಜಿತರನ್ನಾಗಿ ಮಾಡಿದ ಸುದ್ದಿ ತಿಳಿಯಿತು. ಅದೇ ಸಮಯಕ್ಕೆ ಕಂಪನಿಯವರು ಹಾಗು ನಿಜಾಮರಿಗೆ ದ್ವೇಷ ಉಂಟಾಯಿತು. ಸ್ಥಳೀಯ ನಾಯಕರಿಗೆ ನಾವು ಉಪದ್ರವ ಕೊಡುವುದಿಲ್ಲ, ಎಲ್ಲ ವಿಧದಲ್ಲೂ ನಿಮ್ಮನ್ನು ಕಾಪಾಡುತ್ತೇವೆ. ಟಿಪ್ಪುವಿನ ಎಲ್ಲ ಪ್ರದೇಶಗಳೂ ಕಂಪನಿಗೆ ಸೇರಿದ್ದು ನೀವುಗಳು ಕಂಪನಿಯ ಪರ ಕೆಲಸ ಮಾಡಬೇಕು ಎಂದು ಅಪ್ಪಣೆ ಕೊಡಿಸಿದರು. ಬೆಂಗಳೂರಿನಲ್ಲಿ ರೀಟ್ಸ್ ಸಾಹೇಬರನ್ನು ಕಂಡುಬರಲು ತಮ್ಮ ವಕೀಲರೊಂದಿಗೆ ಹೋಗಿಬಂದರು. ಕೆಲವು ಕಾಲದ ನಂತರ ಚನ್ನಬಸಪ್ಪಗೌಡರು ಸಹೋದರನ ಮಗ ದೊಡ್ಡ ಕಣ್ಣೇಗೌಡರ ಮಗ ತೋಂಟದರಾಯಗೌಡರು ಅಧಿಕಾರಕ್ಕೆ ಬಂದರು ಹಾಗೂ ಕಂಪನಿಯ ಪರವಾಗಿದ್ದರು. ಅದೇ ಸಮಯಕ್ಕೆ ವೆಂಕಟಗಿರಿ ತಾಲೂಕು ಬಚರಹಳ್ಳಿ, ಪಯಿನುಗಂಟಲಹಳ್ಳಿ ಗ್ರಾಮದಲ್ಲಿ ಕೆರೆಗಳು ತುಂಬಿ ಹರಿದು ಪ್ರವಾಹ ಬಂದು ಗ್ರಾಮಗಳನ್ನು ರಕ್ಷಿಸುವ ಮನವಿಯಲ್ಲಿ ಸ್ಥಳೀಯ ದೊರೆಗಳ ವಂಶಾವಳಿಯನ್ನು ಬರೆಸಲಾಗಿದೆ. ೧೭೫೭ನೇ ಮನ್ಮಥನಾಮ ಸಂವತ್ಸರ ಆಷಾಢಮಾಸದಲ್ಲಿ ತೋಂಟದ ರಾಯಗೌಡರು ಮೃತರಾಗಿ ಅವರ ಮಕ್ಕಳಾದ ಚಿಕ್ಕಪ್ಪಗೌಡರಿಗೆ ಪಟ್ಟಾಭಿಷೇಕವಾಯಿತು. (ಇದು ಕೈಫಿಯತ್ತಿನ ಮುಖ್ಯ ಅಂಶಗಳ ಸಾರ).

### ಚಾರಿತ್ರಿಕ ಪರಿಶೀಲನೆ

ತುಮಕೂರು ಜಿಲ್ಲೆಯ ಮಧುಗಿರಿಯು ವಿಜಯನಗರ ಅರಸರ ಕಾಲದ ಪಾಳೆಯ ಪಟ್ಟುಗಳಲ್ಲಿ ಗಮನಾರ್ಹವಾದ ಪಾಳೆಯ ಪಟ್ಟಾಗಿತ್ತೆಂದು ಅಲ್ಲಿನ ಕೋಟೆಯು ಸಾಕ್ಷಿಯಾಗಿದೆ. ಮೈಸೂರಿನ ಇತಿಹಾಸದಲ್ಲಿ ಮದ್ದಗಿರಿ, ಟಿಪ್ಪುವಿನ ಕಾಲದಲ್ಲಿ ಪತ್ತಹಬಾದ್, ಪ್ರಸ್ತುತ ಮಧುಗಿರಿ ಇತ್ಯಾದಿಯಾಗಿ ಕರೆಯಲಾಗಿರುವ ಇದು ಕ್ರಿ.ಶ. ೧೭ ಮತ್ತು ೧೮ನೇ ಶತಮಾನದಲ್ಲಿ ಮೈಸೂರು ಒಡೆಯರು, ಮರಾಠರು, ಬ್ರಿಟಿಷರ ಗಮನ ಸೆಳೆದಿತ್ತು ಎಂದರೆ ತಪ್ಪಾಗಲಾರದು.

ಚಾರಿತ್ರಿಕವಾಗಿ ಕೈಫಿಯತ್ತಿನ ವಿವರಗಳನ್ನು ಗಮನಿಸುವುದಾದರೆ ಮದ್ದಗಿರಿ ಅಥವಾ ಮಧುಗಿರಿಯ ಪಾಳೆಯಗಾರರು ಮಧುಗಿರಿ ಸೇರಿದಂತೆ ಚನ್ನರಾಯನದುರ್ಗದವರೆವಿಗೂ ತಮ್ಮ ರಾಜ್ಯವನ್ನು ವಿಸ್ತರಿಸಿದ್ದರು. ವಿಜಯನಗರದ ಮಹಾಪ್ರಭುಗಳಾದ ಶ್ರೀರಂಗರಾಯರ ಉಲ್ಲೇಖ ಈ ಕೈಫಿಯತ್ತಿನಲ್ಲಿ ಬಂದಿದೆ. ಮೂರನೇ ಶ್ರೀರಂಗರಾಯರು ಪಟ್ಟಕ್ಕೆ ಬಂದ ತರುವಾಯ ಅಂದರೆ ಕ್ರಿ. ಶ. ೧೬೪೨- ಕ್ರಿ.ಶ. ೧೬೪೬ (ಪರಾಜಿತನಾಗಿ ೧೬೮೧ ವರೆಗೆ)ರಲ್ಲಿ ಅಸ್ಥಿತ್ವದಲ್ಲಿದ್ದ ಈ ಪಾಳೆಯಪಟ್ಟನ್ನು ರಾಮಪ್ಪಗೌಡ ಮತ್ತು ತಿಮ್ಮಪ್ಪ ಗೌಡರೆಂಬ ಸಹೋದರರು ಆಳುತ್ತಿದ್ದರು. ಕಾಲಾನಂತರ ಆ ಸಹೋದರರಲ್ಲಿ ಅನ್ಯೋನ್ಯತೆಯಿರಲಿಲ್ಲ.

ಮೈಸೂರು ಒಡೆಯರ ಕಾಲದಲ್ಲಿ ಮೈಸೂರು ಒಡೆಯರು ದುರ್ಬಲರಾಗುತ್ತಾ ನಡೆದಂತೆ ನಂಜರಾಜಯ್ಯ ಹಾಗೂ ದೇವರಾಜ ಎಂಬ ಇಬ್ಬರು ಸರ್ವಾಧಿಕಾರಿಗಳು ತಲೆ ಎತ್ತಿ ಸುತ್ತಮುತ್ತಲಿನ ಪಾಳೆಯಪಟ್ಟುಗಳನ್ನು ವಶಪಡಿಸಿಕೊಳ್ಳುತ್ತಾ ನಡೆದರು. ಹಾಗೆ ಅವರ ವಶಕ್ಕೆ ಬಂದ ಪಾಳೆಯಪಟ್ಟಿನಲ್ಲಿ ಮುದ್ದಗಿರಿಯೂ ಒಂದು. ಆ ಮದ್ದಗಿರಿಯ ಪಾಳೆಗಾರರ ಸಹೋದರರಲ್ಲಿ ಅನೈಕ್ಯಮತ್ಯ ಮುಖ್ಯ ಕಾರಣವಾಗಿ ಅವರನ್ನು ಬಂಧಿಸಿ ಶ್ರೀರಂಗಪಟ್ಟಣ ಕಾರಾಗೃಹಕ್ಕೆ ತಳ್ಳಿದರು. ಕೆಲವು ಕಾಲದ ನಂತರ ಹೆಚ್ಚಿನ ದಂಡ ತೆತ್ತು ಅಲ್ಲಿಂದ ಬಿಡುಗಡೆ ಹೊಂದಿದರು.

ತಮಗೆ ವಿಧೇಯರಾಗಿರುವರೆಂಬ ಭರವಸೆಯ ಮೇಲೆ ಅವರ ಊಟ, ವಸತಿ ಇತರೆ ಸೌಕರ್ಯಕ್ಕಾಗಿ ತೊಂಟದ ರಾಯನ ಕುಟುಂಬ ವರ್ಗಕ್ಕೆ ಕೆರೆಯೂರು ಎಂಬ ಗ್ರಾಮವನ್ನು ಬಹುಶಃ ವಾರ್ಷಿಕ ಪೊಗದಿಯ ಆಧಾರದ ಮೇಲೆ ನೀಡಿದರು.

ಕಾಲಾನಂತರ ಹೈದರ್ ಅಲಿ ಹಾಗು ಟಿಪ್ಪುಸುಲ್ತಾನರು ಮೈಸೂರಿನ ಸರ್ವಾಧಿಕಾರಿಗಳಾಗಲಾಗಿ ಮಧುಗಿರಿ ಸೇರಿದಂತೆ ಸುತ್ತಲಿನ ಎಲ್ಲ ಪ್ರದೇಶಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡುದಲ್ಲದೆ ಹೆಚ್ಚಿನ ತೆರಿಗೆಯನ್ನು ವಿಧಿಸಿದರು. ಕ್ರಿ.ಶ. ಹದಿನೆಂಟನೇ ಶತಮಾನದಲ್ಲಿ ಅಂದರೆ ೧೭೬೭ರಲ್ಲಿ ಕೆಲವು ಕಾಲ ಮರಾಠರ ಮಾಧವರಾವನ ನೇತೃತ್ವದಲ್ಲಿ ಮಿಡಿಗೇಶಿಯು ಮರಾಠರ ವಶವಾಗಿತ್ತು. ಟಿಪ್ಪು ಪ್ರಬಲವಾದಂತೆಲ್ಲ ಮರಾಠರು ಅಲ್ಲಿಂದ ಕಾಲ್ಕಿತ್ತರು. ಸ್ವಾಭಾವಿಕವಾಗಿ ಮಧುಗಿರಿ ಸೇರಿದಂತೆ ಹಲವಾರು ಪ್ರದೇಶಗಳು ಟಿಪ್ಪುವಿನ ಕೈಸೇರಿತು. ಟಿಪ್ಪುವಿನ ಕಾಲದಲ್ಲಿ ವ್ಯಾಪಾರ ವಾಣಿಜ್ಯದ ಕೇಂದ್ರವಾಗಿದ್ದು ಇದನ್ನು ಪತ್ತಹಬಾದ್ ಎಂದು ಕರೆಯಲಾಗುತ್ತಿತ್ತು.

ಮಿಡಿಗೇಶಿಗೆ ಚನ್ನಬಸಪ್ಪಗೌಡರು ಅಧಿಕಾರಕ್ಕೆ ಬರಲಾಗಿ ತಮ್ಮ ಸಂಸ್ಥಾನವನ್ನು ಮತ್ತೆ ಪಡೆಯಲು ಟಿಪ್ಪುವಿನ ಶತ್ರುಗಳಾದ ಬ್ರಿಟಿಷರ ಪರ ನಿಂತರು. ಮೂರನೇ ಆಂಗ್ಲೊ

ಮೈಸೂರು ಯುದ್ಧದಲ್ಲಿ ಟಿಪ್ಪು ದಯನೀಯ ಸೋಲನ್ನು ಕಂಡಿದ್ದ. ನಾಲ್ಕನೇ ಆಂಗ್ಲೊ ಮೈಸೂರು ಯುದ್ಧವು ಸನಿಹವಾದಂತೆಲ್ಲ ಬ್ರಿಟೀಷರು ಹೈದರಾಬಾದಿನ ನಿಜಾಮ, ಮರಾಠರ ಸಹಾಯದೊಂದಿಗೆ ಟಿಪ್ಪುವಿನ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಾ ಬಂದರು. ಚನ್ನಬಸಪ್ಪಗೌಡರು ಮದ್ರಾಸ್ ಪ್ರಾಂತ್ಯದ ಕೃಷ್ಣಗಿರಿಯಲ್ಲಿ ಬೀಡುಬಿಟ್ಟಿದ್ದ ಸೈನ್ಯದ ಮುಖಂಡ ಕರ್ನಲ್ ರೀಟ್ಸ್‌ರನ್ನು ಭೇಟಿಮಾಡಿ ತಮಗೆ ಸಹಾಯ ಮಾಡಬೇಕೆಂದು ಕೇಳಿಕೊಳ್ಳಲು ತಾವು ತೊಂದರೆ ಯಲ್ಲಿರುವರಿಗೆ ಸಹಾಯಮಾಡುತ್ತೇವೆ, ಜನರಲ್ ಹ್ಯಾರಿಸರ ನೇತೃತ್ವದ ಸೈನ್ಯ ಬೆಂಗಳೂರಿನ ಕಡೆ ಬರುತ್ತದೆ, ನಮ್ಮ ಕಂಪನಿಯ ದಂಡಿಗೆ ಊಟ, ವಸತಿ ಇತ್ಯಾದಿ ಸೌಲಭ್ಯ ಒದಗಿಸಿ ಕೊಡಬೇಕೆಂದು ಹೇಳಲಾಗಿ ಅದರಂತೆ ತಮ್ಮ ಪ್ರದೇಶಕ್ಕೆ ಹಿಂತಿರುಗಿದ ಚನ್ನಬಸಪ್ಪಗೌಡರು ಬ್ರಿಟೀಷರ ಆಗಮನಕ್ಕಾಗಿ ತವಕಿಸುತ್ತಿದ್ದರು.

ಹೈದರ್ ಹಾಗೂ ಟಿಪ್ಪುಸುಲ್ತಾನರ ವೈರಿಗಳಾದ ಬ್ರಿಟೀಷರ ಆಶ್ರಯ ಪಡೆದರೆ ತಮ್ಮ ಪ್ರದೇಶಗಳು ತಮ್ಮ ಕೈಸೇರುವುದೇನೋ ಎಂಬ ಆಸೆಯಿಂದ ನಾಲ್ಕನೇ ಮೈಸೂರು ಯುದ್ಧದಲ್ಲಿ ಸ್ಥಳೀಯ ನಾಯಕರು ಬ್ರಿಟೀಷರ ಪರನಿಂತ ರೆನ್ನಲು ಈ ದಾಖಲೆ ಅತ್ಯುತ್ತಮ ಉದಾಹರಣೆಯಾಗಿದೆ. ಇಂತಹ ಪಾಳೆಯಗಾರರು ಬ್ರಿಟಿಷರಿಗೆ ಪ್ರತ್ಯೇಕವಾಗಿ ಇಲ್ಲವೆ ಪರೋಕ್ಷವಾಗಿ ಸಹಾಯ ಮಾಡಿದುದರಿಂದಾಗಿ ಬ್ರಿಟೀಷರು ನಾಲ್ಕನೆಯ ಮೈಸೂರು ಯುದ್ಧದಲ್ಲಿ ಗೆಲ್ಲಲು ಸಹಾಯ ವಾಯಿತು. ಅಂತಿಮವಾಗಿ ಬ್ರಿಟೀಷರು ಟಿಪ್ಪು ಗಳಿಸಿದ ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಅದರಲ್ಲಿ ಒಂದು ಭಾಗವನ್ನು ಮೈಸೂರು ಒಡೆಯರಿಗೆ ಕೊಡಲು, ಒಡೆಯರಿಂದ ಜೀವನಾಂಶಕ್ಕಾಗಿ ಸನ್ನದು ಪಡೆಯಲು ತಯಾರಿಸಿದ ಕೈಫಿಯತ್ತು ಇದಾಗಿದೆಯೆಂದು ಕೂಡ ಹೇಳಬಹುದು. ಉದ್ದನೆಯ ಸುರಳಿ ಸುತ್ತಿದ ಈ ಪತ್ರ ಮೇಲುನೋಟಕ್ಕೆ ಮೋಡಿ ಅಕ್ಷರದಂತೆ ಕಂಡುಬರುತ್ತದೆ. ಈ ಪತ್ರವನ್ನು ಕಾಲಕಾಲಕ್ಕೆ ನಕಲು ಮಾಡಿದಂತೆ ತೋರುತ್ತದೆ.

○